## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 571
ಸದಸ್ಯರ ಹೆಸರು : ಶ್ರೀ ಆರ್.ಬಿ. ತಿಮ್ಮಾಪೂರ
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 05.02.2021

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊರೋನಾ ಅವಧಿಯಲ್ಲಿ ಬಿ.ಎಂ.ಟಿ.ಸಿ. ಮತ್ತು ಕೆ.ಎಸ್.ಆರ್.ಟಿ.ಸಿ.ಗಳ ನಷ್ಟದ ಪ್ರಮಾಣವನ್ನು ಸರಿದೂಗಿಸಲು ಸಾರಿಗೆ ಇಲಾಖೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳಾವುವು; | ಕೊರೋನಾ ಅವಧಿಯಲ್ಲಿ ಬಿ.ಎಂ.ಟಿ.ಸಿ. ಮತ್ತು ಕೆ.ಎಸ್.ಆರ್.ಟಿ.ಸಿ.ಗಳ ನಷ್ಟದ ಪ್ರಮಾಣವನ್ನು ಸರಿದೂಗಿಸಲು ಸಾರಿಗೆ ಇಲಾಖೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಈ ಕೆಳಕಂಡಂತಿದೆ:<br><br>**ಕ.ರಾ.ರ.ಸಾ.ನಿಗಮ:**<br>➢ ಕೋವಿಡ್-19 ಲಾಕ್‌ಡೌನ್ ಪೂರ್ವದಲ್ಲಿದ್ದಂತೆ ಅನುಸೂಚಿಗಳನ್ನು ಹಂತ-ಹಂತವಾಗಿ ಕಾರ್ಯಾಚರಣೆ ಮಾಡಿ, ಆದಾಯವನ್ನು ಗಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಪ್ರಸಕ್ತ ವರ್ಷ ಯಾವುದೇ ಹೊಸ ಅನುಸೂಚಿಗಳನ್ನು ಪ್ರಾರಂಭಿಸಲಾಗುವುದಿಲ್ಲ. ಇದರಿಂದಾಗಿ ಹೊಸ ವಾಹನಗಳನ್ನು ಖರೀದಿಸಲಾಗುವುದಿಲ್ಲ.<br>➢ ಅಂತರರಾಜ್ಯ ಸಂಚಾರಕ್ಕೆ ಸಂಬಂಧಿಸಿದಂತೆ ಆಂಧ್ರಪ್ರದೇಶ, ಕೇರಳ, ಗೋವಾ, ಮಹಾರಾಷ್ಟ್ರ, ತೆಲಂಗಾಣ, ಪುದುಚೇರಿಗೆ ಹಾಗೂ ತಮಿಳುನಾಡು ರಾಜ್ಯಗಳಿಗೆ ಸಾರಿಗೆಗಳ ಕಾರ್ಯಾಚರಣೆಯನ್ನು ಪ್ರಾರಂಭಿಸಲಾಗಿದೆ.<br>➢ ಪೂರ್ಣ ಪ್ರಮಾಣವಾಗಿ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲು ಸಾಧ್ಯವಾಗದಿದ್ದರೂ ಸಹ, ಪ್ರಯಾಣಿಕರ ಬೇಡಿಕೆಯನುಸಾರ ಹಾಗೂ ಪ್ರಯಾಣಿಕರ ದಟ್ಟಣೆ ಮತ್ತು ಅವಶ್ಯಕತೆಗನುಗುಣವಾಗಿ ಬಸ್ಸುಗಳ ಸಂಖ್ಯೆಯನ್ನು ಹಂತಹಂತವಾಗಿ ಹೆಚ್ಚಿಸಲಾಗುತ್ತಿದೆ.<br>➢ ಕರೋನಾ ಅವಧಿಯಲ್ಲಿ ಉಂಟಾಗಿರುವ ನಷ್ಟವನ್ನು ಭರಿಸಿಕೊಳ್ಳಲು ನಿಗಮವು ಪರ್ಯಾಯ ಆದಾಯ ಕ್ರೋಢೀಕರಣದ ಸಲುವಾಗಿ ನೂತನ ಪಾರ್ಸಲ್ ಮತ್ತು ಕೊರಿಯರ್ ವ್ಯವಸ್ಥೆಯನ್ನು ಅನುಷ್ಠಾನಗೊಳಿಸಲು ಯೋಜಿಸಿದ್ದು, ಇದರಿಂದ ನಿಗಮದ ಸಾರಿಗೇತರ ಆದಾಯವನ್ನು ಹೆಚ್ಚಿಸಲು ಕ್ರಮ ವಹಿಸಲಾಗುತ್ತಿದೆ.<br><br>**ಬೆಂ.ಮ.ಸಾ.ಸಂಸ್ಥೆ:**<br>➢ ಸಾರ್ವಜನಿಕರನ್ನು ಸಮೂಹ ಸಾರಿಗೆಯತ್ತ ಸೆಳೆಯುವ ದೃಷ್ಟಿಯಿಂದ ಸಂಸ್ಥೆಯು ವಿವಿಧ ರೀತಿಯ ರಿಯಾಯಿತಿ ಪಾಸುಗಳನ್ನು ಹಾಗೂ ಕಾರ್ಮಿಕ ಇಲಾಖೆಯ ಸಹಯೋಗದೊಂದಿಗೆ ಬೆಂಗಳೂರು ನಗರದ ಕಟ್ಟಡ ಮತ್ತು ನಿರ್ಮಾಣ ಕಾರ್ಮಿಕರಿಗೆ 'ಸಹಾಯ ಹಸ್ತ' ಪಾಸನ್ನು ವಿತರಣೆ ಮಾಡುತ್ತಿದೆ. ಅಲ್ಲದೆ, ಮಹಿಳಾ ಗಾರ್ಮೆಂಟ್ಸ್ ನೌಕರರನ್ನು ಸಂಸ್ಥೆಯ ವಾಹನಗಳನ್ನು ಬಳಸುವತ್ತ ಉತ್ತೇಜಿಸಲು, ಹೆಚ್ಚಿನ ರಿಯಾಯಿತಿ ದರದಲ್ಲಿ ಮಾಸಿಕ ಪಾಸುಗಳನ್ನು ಕಾರ್ಮಿಕ ಇಲಾಖೆಯ ಸಹಯೋಗದೊಂದಿಗೆ ವಿತರಣೆ ಮಾಡುವ ಕುರಿತು ಪರಿಶೀಲಿಸಲಾಗುತ್ತಿದೆ.<br>➢ ಸರ್ಕಾರ, ಬಿಬಿಎಂಪಿ, ಬಿಟಿಪಿ, ನಗರ ಭೂ ಸಾರಿಗೆ ನಿರ್ದೇಶನಾಲಯ ರವರುಗಳ ಸಹಯೋಗದೊಂದಿಗೆ ಸೆಂಟ್ರಲ್ ಸಿಲ್ಕ್ ಬೋರ್ಡ್‌ನಿಂದ ಟಿನ್ ಫ್ಯಾಕ್ಟರಿಯವರೆಗೆ 'ಬಸ್ ಆದ್ಯತಾ ಪಥವನ್ನು' ಯಶಸ್ವಿಯಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಇದರಿಂದ ನಗರದ ಸಂಚಾರ ದಟ್ಟಣೆಯು ಕಡಿಮೆಯಾಗಿ, ಸಾರ್ವಜನಿಕರನ್ನು ಸಮೂಹ ಸಾರಿಗೆಯನ್ನು ಬಳಸಲು ಉತ್ತೇಜಿಸಲಾಗುತ್ತಿದೆ.<br>➢ ಮುಂದುವರೆದು, ನಗರದ ಸಂಚಾರ ದಟ್ಟಣೆಯನ್ನು ಕಡಿಮೆಗೊಳಿಸುವ ಹಿನ್ನಲೆಯಲ್ಲಿ ಹೆಚ್ಚಿನ ಸಂಚಾರ ದಟ್ಟಣೆಯ ಕಾರಿಡಾರ್‌ಗಳಲ್ಲಿ ಬಸ್ ಆದ್ಯತಾ ಪಥವನ್ನು 2ನೇ ಹಂತದಲ್ಲಿ ಅನುಷ್ಠಾನಗೊಳಿಸಲು ಯೋಜಿಸಲಾಗಿದೆ.<br>➢ ಸಂಸ್ಥೆಯು ಸಾಂದರ್ಭಿಕ ಒಪ್ಪಂದ, ಖಾಯಂ ಗುತ್ತಿಗೆ ಹಾಗೂ ಡೆಡಿಕೇಟೆಡ್ ಸೇವೆಗಳನ್ನು ಒದಗಿಸುತ್ತಿದೆ. |

...2

| | | |
|---|---|---|
| | | ➢ ಮೆಟ್ರೋ ಪ್ರಯಾಣಿಕರನ್ನು ಸಂಸ್ಥೆಯ ಸಾರಿಗೆ ಸೌಲಭ್ಯದತ್ತ ಸೆಳೆಯಲು ಎಲ್ಲಾ ಮೆಟ್ರೋ ನಿಲ್ದಾಣಗಳಿಂದ ಮೆಟ್ರೋ ಫೀಡರ್ ಸೇವೆಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.<br>➢ ಸಮೂಹ ಸಾರಿಗೆಯನ್ನು ಉತ್ತೇಜಿಸಲು ಹಾಗೂ ಮೆಟ್ರೋ ಪ್ರಯಾಣಿಕರಿಗೆ ಸಮರ್ಪಕ ಮೆಟ್ರೋ ಫೀಡರ್ ಸಾರಿಗೆ ಸೌಲಭ್ಯವನ್ನು ಒದಗಿಸುವ ನಿಟ್ಟಿನಲ್ಲಿ 90 ಎಲೆಕ್ಟ್ರಿಕ್ ಬಸ್ಸುಗಳನ್ನು ಸಂಸ್ಥೆಯ ವಾಹನ ಬಲಕ್ಕೆ ಸೇರ್ಪಡೆಗೊಳಿಸಲು ಯೋಜಿಸಲಾಗಿದೆ. |
| ಆ) | ಗ್ರಾಮೀಣ ಭಾಗದ ವಿದ್ಯಾರ್ಥಿ ಸಮೂಹಕ್ಕೆ ತೊಂದರೆಯಾಗದಂತೆ ಕಾರ್ಯಕ್ರಮಗಳನ್ನು ರೂಪಿಸಲಾಗಿದೆಯೇ; | ಪ್ರಸ್ತುತ 01 ರಿಂದ 07ನೇ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ ಮತ್ತು ಎಲ್ಲಾ ತರಗತಿಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್ ಪಾಸುಗಳನ್ನು ಹಾಗೂ ಉಳಿದ ವಿದ್ಯಾರ್ಥಿಗಳಿಗೆ ರಿಯಾಯಿತಿ ದರದ ಪಾಸುಗಳನ್ನು ವಿತರಣೆ ಮಾಡಲಾಗುತ್ತಿದೆ.<br>ಈಗಾಗಲೇ ನಗರ ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಶಾಲಾ ಕಾಲೇಜು ಮಾರ್ಗಗಳಲ್ಲಿ ಕನಿಷ್ಠ ಸಾಮಾನ್ಯ ಸೇವೆಗಳನ್ನು ಪ್ರಾರಂಭಿಸಲಾಗಿರುತ್ತದೆ ಹಾಗೂ ಅವಶ್ಯಕತೆಗೆ ಹಾಗೂ ಬೇಡಿಕೆಗೆ ಅನುಸಾರವಾಗಿ ಸಾರಿಗೆಗಳನ್ನು ಹಂತಹಂತವಾಗಿ ಪ್ರಾರಂಭಿಸಲಾಗುತ್ತಿದೆ. |
| ಇ) | ಕೊರೋನಾ ನಂತರದಲ್ಲಿ ಬಿ.ಎಂ.ಟಿ.ಸಿ. ಮತ್ತು ಕೆ.ಎಸ್.ಆರ್.ಟಿ.ಸಿ. ಸಂಸ್ಥೆಗಳು ಗಳಿಸುತ್ತಿರುವ ಆದಾಯವೆಷ್ಟು? | ಕೊರೋನಾ ನಂತರದಲ್ಲಿ (ಏಪ್ರಿಲ್–2020 ರಿಂದ 29.01.2021 ರವರೆಗೆ) ಬಿ.ಎಂ.ಟಿ.ಸಿ. ಪ್ರತಿ ದಿನ ಸರಾಸರಿ ರೂ.149.81 ಲಕ್ಷ ಮತ್ತು ಕೆ.ಎಸ್.ಆರ್.ಟಿ.ಸಿ. ಪ್ರತಿ ದಿನ ಸರಾಸರಿ ರೂ.369.39 ಲಕ್ಷ ಸಾರಿಗೆ ಆದಾಯ ಗಳಿಸಿರುತ್ತದೆ. ಮಾಹೆವಾರು ಗಳಿಸುತ್ತಿರುವ ಆದಾಯದ ವಿವರ ಈ ಕೆಳಕಂಡಂತಿದೆ:<br>(ರೂ.ಕೋಟಿಗಳಲ್ಲಿ) |

| ಮಾಹೆ | ಕ.ರಾ.ರ.ಸಾ.ನಿಗಮ | ಬೆಂ.ಮ.ಸಾ.ಸಂಸ್ಥೆ |
|---|---|---|
| ಏಪ್ರಿಲ್–2020 | 1.93 | 1.43 |
| ಮೇ–2020 | 24.71 | 16.09 |
| ಜೂನ್–2020 | 65.09 | 42.14 |
| ಜುಲೈ–2020 | 38.19 | 24.52 |
| ಆಗಸ್ಟ್–2020 | 84.77 | 39.82 |
| ಸೆಪ್ಟೆಂಬರ್–2020 | 128.46 | 54.18 |
| ಅಕ್ಟೋಬರ್–2020 | 154.53 | 62.97 |
| ನವೆಂಬರ್–2020 | 194.26 | 70.51 |
| ಡಿಸೆಂಬರ್–2020 | 196.96 | 69.52 |
| ಜನವರಿ–2021 | 241.42 | 84.20 |
| | **1130.32** | **465.38** |

ಸಂಖ್ಯೆ: ಟಿಡಿ 42 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು